ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



**ಕರ್ನಾಟಕ ವಿಧಾನ ಪರಿಷತ್ತು**

ನೂರ ನಲವತ್ತೊಂದನೆಯ ಅಧಿವೇಶನ

ಶುಕ್ರವಾರ, ದಿನಾಂಕ: 25ನೇ ಸೆಪ್ಟಂಬರ್, 2020

ರಾಜ್ಯದ ಕಲಾ ಸಂಘಗಳಿಗೆ ಮತ್ತು ಹೊರ ನಾಡಿನ ಸಂಘ ಸಂಸ್ಥೆಗಳಿಗೆ ಸರ್ಕಾರ ನೀಡುವ ವಾರ್ಷಿಕ ಅನುದಾನ ಕುರಿತು

ಶ್ರೀ ಆರ್. ಪ್ರಸನ್ನ ಕುಮಾರ್ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ) :-

672 (696) ಮಾನ್ಯ ಪ್ರವಾಸೋದ್ಯಮ, ಕನ್ನಡ ಮತ್ತು ಸಂಸ್ಕೃತಿ ಹಾಗೂ ಯುವ ಸಬಲೀಕರಣ ಮತ್ತು ಕ್ರೀಡಾ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ:-

(ಅ) ರಾಜ್ಯದ ಕಲಾ ಸಂಘ ಮತ್ತು ಹೊರ ನಾಡಿನ ಸಂಘ ಸಂಸ್ಥೆಗೆ ಸರ್ಕಾರ ನೀಡುವ ವಾರ್ಷಿಕ ಅನುದಾನವೆಷ್ಟು ;

(ಆ) ಜಿಲ್ಲಾ ಹಾಗೂ ತಾಲ್ಲೂಕು ಮಟ್ಟದಲ್ಲಿ ಕಲಾ ಸಂಘಗಳಿಗೆ ಸರ್ಕಾರದಿಂದ ನೀಡುವ ಅನುದಾನವೆಷ್ಟು;

(ಇ) ಕಳೆದ ಕೆಲವು ವರ್ಷಗಳಿಂದ ಕಲಾವಿದರುಗಳು ಆನ್‌ಲೈನ್ ಮುಖಾಂತರ ನಿಯಮಾನುಸಾರ ಅರ್ಜಿ ಸಲ್ಲಿಸಿದ್ದರೂ ಕಲಾವಿದರು ಮತ್ತು ಕಲಾ ಸಂಸ್ಥೆಗಳಿಗೆ ವರ್ಷ ಮುಗಿದರೂ ಅವರ ಖಾತೆಗೆ ಹಣ ಜಮೆ ಮಾಡದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ;

(ಈ) ಕನ್ನಡ ಮತ್ತು ಸಂಸ್ಕೃತಿ ಇಲಾಖೆಯಲ್ಲಿ ಧನ ಸಹಾಯ ಮಂಜೂರಾತಿ ಸಮಿತಿಯನ್ನು ರಚಿಸಲಾಗಿದೆಯೇ ; ಹಾಗಿದ್ದಲ್ಲಿ, ಸಮಿತಿಯಲ್ಲಿರುವ ಅಧ್ಯಕ್ಷರು ಮತ್ತು ಸದಸ್ಯರ ವಿವರ ನೀಡುವುದು?